# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 151
ಸದಸ್ಯರ ಹೆಸರು : ಶ್ರೀ ನಸೀರ್ ಅಹ್ಮದ್ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 13-09-2021
ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಹ ಶಿಕ್ಷಕರಿಗೆ ಪದವಿ ಪೂರ್ವ ಕಾಲೇಜಿಗೆ ಉಪನ್ಯಾಸಕರಾಗಿ ಬಡ್ತಿ ನೀಡದೆ, 8 ರಿಂದ 10 ವರ್ಷಗಳು ಕಳೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 71 ಎಸ್‌ಆರ್‌ಇ 94 ದಿನಾಂಕ:27/05/1998ರಲ್ಲಿ ಶೇಕಡ 50ರಷ್ಟು ಉಪನ್ಯಾಸಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಮತ್ತು ಶೇಕಡ 50ರಷ್ಟು ಪ್ರೌಢ ಶಾಲಾ ಸಹ ಶಿಕ್ಷಕರ ವೃಂದದಿಂದ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರ ವೃಂದಕ್ಕೆ ಬಡ್ತಿ ನೀಡಲು ಅವಕಾಶ ಕಲ್ಪಿಸಲಾಗಿತ್ತು. ಅದರಂತೆ, 2011ರಲ್ಲಿ ಅರ್ಹ 487 ಮತ್ತು 697 ಪ್ರೌಢ ಶಾಲಾ ಸಹ ಶಿಕ್ಷಕರನ್ನು ಉಪನ್ಯಾಸಕರ ವೃಂದಕ್ಕೆ ಬಡ್ತಿ ನೀಡಲಾಗಿದೆ.<br><br>ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 35 ಡಿಜಿಡಿ 2009 ದಿನಾಂಕ:15/05/2014 ರಂದು ವೃಂದ ಮತ್ತು ನೇಮಕಾತಿ ನಿಯಮಕ್ಕೆ ಪರಿಷ್ಕರಣೆ ಮಾಡಿ ಶೇಕಡ 75ರಷ್ಟು ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಮತ್ತು ಶೇಕಡ 25ರಷ್ಟು ಹುದ್ದೆಗಳನ್ನು ಬಡ್ತಿ ಮೂಲಕ ತುಂಬಲು ಅವಕಾಶ ಕಲ್ಪಿಸಲಾಗಿದೆ.<br><br>ಪ್ರೌಢ ಶಾಲಾ ಸಹ ಶಿಕ್ಷಕರಿಗೆ ಉಪನ್ಯಾಸಕರ ವೃಂದಕ್ಕೆ ಬಡ್ತಿ ಕೋಟಾದಲ್ಲಿ ಶೇಕಡ 50ರಷ್ಟು ಪದೋನ್ನತಿ ನೀಡಿದ್ದರಿಂದ ಈಗಾಗಲೇ 395 ಹುದ್ದೆಗಳು ಹೆಚ್ಚುವರಿಯಾಗಿದ್ದು, ಶೇಕಡ 75:25ರ ಬಡ್ತಿ ಕೋಟಾದ ಹುದ್ದೆಗಳು ಖಾಲಿ ಇಲ್ಲದಿರುವುದರಿಂದ ಪ್ರಸ್ತುತ ಬಡ್ತಿ ನೀಡಲು ಅವಕಾಶವಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ವಿಳಂಬಕ್ಕೆ ಕಾರಣಗಳೇನು; ಯಾವ ಕಾಲಮಿತಿಯಲ್ಲಿ ಬಡ್ತಿ ನೀಡಲಾಗುವುದು ? | ಸರ್ಕಾರಿ ಪದವಿ ಪೂರ್ವ ಕಾಲೇಜು ಉಪನ್ಯಾಸಕರ ಬಡ್ತಿ ಕೋಟಾದ ಹುದ್ದೆಗಳಿಗೆ ಈಗಾಗಲೇ ಬಡ್ತಿ ನೀಡಿದಾಗ 395 ಹುದ್ದೆಗಳು ಹೆಚ್ಚುವರಿಯಾಗಿದ್ದವು. ಬಡ್ತಿ ಕೋಟಾದಡಿ ಹುದ್ದೆಗಳು ಖಾಲಿ ಇಲ್ಲದೇ ಇರುವುದರಿಂದ ಪ್ರಸ್ತುತ ಬಡ್ತಿ ನೀಡಲು ಅವಕಾಶ ಇರುವುದಿಲ್ಲ. |

| | | |
|---|---|---|
| | | ಮುಂದುವರೆದು, ಈ ದಿನಾಂಕಕ್ಕೆ ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರ ವಿಷಯವಾರು ಖಾಲಿ ಹುದ್ದೆ ಮಾಹಿತಿಯನ್ನು ನೇರ ನೇಮಕಾತಿ(ಡಿ.ಆರ್) ಮತ್ತು ಬಡ್ತಿ ನೇಮಕಾತಿ(ಪಿ.ಆರ್) ಅನುಗುಣವಾಗಿ ವಿಂಗಡಣೆ ಕಾರ್ಯ ಪರಿಶೀಲನೆಯಲ್ಲಿದೆ. |

**ಸಂಖ್ಯೆ: ಇಪಿ 125 ಡಿಜಿಡಬ್ಲ್ಯೂ 2021**

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.